



# ಹೊಂಗನಸು




ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 25

| ಸಂಪುಟ: ೦೩ ಸಂಚಿಕೆ: ೧೧ | ಫೆಬ್ರವರಿ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 03 Issue 11 | February 2017 | Pages - 8 | A. Sub. - Rs. 20/- | Editor : Sri. B.R. Ravindranath |





ಚಂದಾ ವಿವರಗಳು

ವಾರ್ಷಿಕ ಚಂದಾ
ರೂ. ೨೦/-

ಐದು ವರ್ಷಗಳ ಚಂದಾ
ರೂ. ೧೦೦/-



ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org


## ‘ಶ್ರೀ ಸಾಹಿತ್ಯ ಪ್ರಶಸ್ತಿ’

ಶ್ರೀಮತಿ ಕಮಲಿನಿ ಶಾ.ಬಾಲೂರಾವ್ ಅವರು ಸ್ಥಾಪಿಸಿರುವ, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಕಳೆದ ಮೂರು ವರ್ಷಗಳಿಂದ ಕೊಡಮಾಡುತ್ತ ಬಂದಿರುವ 2016ನೇ ಸಾಲಿನ‘ಶ್ರೀ ಸಾಹಿತ್ಯ ಪ್ರಶಸ್ತಿ’ಯನ್ನು ನಾಡೋಜ ಡಾ॥ಕಮಲಾಹಂಪನಾ ಅವರಿಗೆ ನೀಡಲಾಯಿತು.ಪ್ರಶಸ್ತಿಯು ಒಂದು ಲಕ್ಷ ರೂಪಾಯಿಗಳು ನಗದು, ಸ್ಮರಣಿಕೆ, ಶಾಲು ಮುಂತಾದವುಗಳನ್ನೊಳಗೊಂಡಿರುತ್ತದೆ.ಬಿ.ಎಂ.ಶ್ರೀ. ಅವರ ಹುಟ್ಟುಹಬ್ಬದ ನೆನಪಿನಲ್ಲಿ ಜನವರಿ 4, 2017ರಂದು ಬೆಂಗಳೂರಿನ ಬಸವನಗುಡಿಯ ಇಂಡಿಯನ್ ಇನ್ಸಿಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ಪ್ರಶಸ್ತಿ ಪ್ರದಾನದ ವಿಶೇಷ ಸಮಾರಂಭವನ್ನು ಏರ್ಪಡಿಸಲಾಗಿತ್ತು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ.ಮನು ಬಳಿಗಾರ್ ಅವರು ಈ ಪ್ರಶಸ್ತಿಯನ್ನು ಪ್ರದಾನ ಮಾಡಿದರು.

ಶ್ರೀಮತಿ ಕಮಲಿನಿ ಶಾ.ಬಾಲೂರಾವ್ ಅವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಮೊದಲಿಗೆ ಡಾ.ಪಿವಿ ನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನು ಆಡಿ ಅತಿಥಿಗಳ ಪರಿಚಯ ಮಾಡಿಕೊಟ್ಟರು.ಡಾ. ಎಲ್. ಜಿ. ಮೀರಾ ಅವರು ನಾಡೋಜ ಡಾ॥ಕಮಲಾ ಹಂಪನಾ ಅವರ ಸಾಧನೆಗಳ ಪರಿಚಯ ಮಾಡಿಕೊಟ್ಟರು. ಪ್ರಶಸ್ತಿ ಸ್ವೀಕರಿಸಿದ ನಾಡೋಜ ಡಾ॥ಕಮಲಾ ಹಂಪನಾ ಅವರು ತಮ್ಮ ವಿದ್ಯಾಭ್ಯಾಸದ ದಿನಗಳಲ್ಲಿ ತಮಗೆ ಮಾರ್ಗದರ್ಶನ ನೀಡಿದ ಗುರುಗಳನ್ನು ನೆನಪಿಸಿಕೊಂಡು ನಂತರ ಕರ್ನಾಟಕವನ್ನು ವಿಭಜನೆ ಮಾಡಲು ಹೊರಟಿರುವ ಕೆಲವರ ಹೇಳಿಕೆಗಳ ಬಗ್ಗೆ ಬೇಸರ ವ್ಯಕ್ತಪಡಿಸಿ ಅಖಂಡ ಕರ್ನಾಟಕವನ್ನು ಉಳಿಸಿಕೊಳ್ಳಲು ನಾವೆಲ್ಲರೂ ಶ್ರಮಿಸಬೇಕು ಎಂದು ಕರೆ ನೀಡಿದರು.

ಡಾ. ಮನು ಬಳಿಗಾರ್ ಅವರು ಪ್ರಶಸ್ತಿಯನ್ನು ಪ್ರದಾನ ಮಾಡಿ ನಂತರ ಅಖಂಡ ಕರ್ನಾಟಕಕ್ಕೆ ಯಾವುದೇ ತೊಂದರೆ ಉಂಟಾಗದಂತೆ ಕನ್ನಡ ಸಾಹಿತ್ಯ ಪರಿಷತ್ತು ಸದಾ ಎಚ್ಚರಿಕೆ ವಹಿಸಿರುತ್ತದೆ ಎಂದು ಆಶ್ವಾಸನೆ ನೀಡಿದರು. ಪ್ರೊ. ಅಬ್ದುಲ್ ಬಶೀರ್ ಅವರು ಪ್ರಶಸ್ತಿ ವಾಚನ ಮಾಡಿದರು ಹಾಗೂ ಶ್ರೀ ಶ್ರೀನಿವಾಸಮೂರ್ತಿ ವಂದನಾರ್ಪಣೆ ಸಲ್ಲಿಸದರು. ರವೀಂದ್ರನಾಥ ಅವರು ಕಾರ್ಯಕ್ರಮದ ನಿರೂಪಣೆ ಮಾಡಿದರು.

ನಾಡೋಜ ಡಾ॥ಕಮಲಾಹಂಪನಾ ಅವರ ಕುಟುಂಬ ವರ್ಗದವರು ಹಾಗೂ ನಾಡಿನ ಪ್ರಖ್ಯಾತ ವಿದ್ವಾಂಸರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



## ಸಂಪಾದಕೀಯ

ಹೊಸ ವರ್ಷ ಪ್ರಾರಂಭಗೊಂಡಿದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು 2017 ರ ಸಾಲಿನಲ್ಲಿ ಹಲವಾರು ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುತ್ತದೆ. ಪ್ರತೀ ತಿಂಗಳಿನಲ್ಲಿ ಕನಿಷ್ಠ 6 ಕಾರ್ಯಕ್ರಮಗಳನ್ನು ತಪ್ಪಿಸದೇ ನಡೆಸಿಕೊಂಡು ಬರಲಾಗುತ್ತಿದೆ. ಈ ಕಾರ್ಯಕ್ರಮಗಳಿಗೆ ಆಹ್ವಾನಿಸಲಾದ ಮುಖ್ಯ ಅತಿಥಿಗಳು ಸಮಯಕ್ಕೆ ಸರಿಯಾಗಿ ಆಗಮಿಸಿ ಕಾರ್ಯಕ್ರಮಗಳನ್ನು ಸಮರ್ಪಕವಾಗಿ ನಡೆಸಿಕೊಡುತ್ತಿದ್ದಾರೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಹಲವಾರು ಅಭಿಮಾನಿಗಳು ನಮ್ಮ ಎಲ್ಲಾ ಕಾರ್ಯಕ್ರಮಗಳಲ್ಲಿ ಸಕ್ರಿಯರಾಗಿ ಭಾಗವಹಿಸುತ್ತಿರುತ್ತಾರೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಾರ್ಯಕ್ರಮಗಳು ಯಶಸ್ವೀಯಾಗಲು ಕಾರಣರಾಗಿರುವ ಎಲ್ಲರಿಗೂ ಹೃತ್ಪೂರ್ವಕ ವಂದನೆಗಳು.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣ ರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು.......

### ಫೆಬ್ರವರಿ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಹೆಚ್ ತಿಪ್ಪೆರುದ್ರ ಸ್ವಾಮಿ | 03-02- 1928 |
| ಬಿಜಿ ಎಲ್ ಸ್ವಾಮಿ | 05-02-1916 |
| ಹಾ.ಮಾ ನಾಯಕ್ | 05-02-1931 |
| ಡಾ ಆನೆ ಉಪಾಧ್ಯ | 06-02-1906 |
| ಜಿ ಎಸ್ ಶಿವರುದ್ರಪ್ಪ | 07-02-1926 |
| ಎಸ್ ವಿ ಪರಮೇಶ್ವರ ಭಟ್ಟ | 08-02-1914 |
| ಸಿಂಪಿ ಲಿಂಗಣ್ಣ | 10-02-1905 |
| ಎಚ್ ಎಲ್ ನಾಗೇಗೌಡ | 11-02-1915 |
| ಎ.ಆರ್. ಕೃಷ್ಣಶಾಸ್ತ್ರಿ | 12-02-1890 |
| ಎಂ ಗೋಪಾಲ ಕೃಷ್ಣಅಡಿಗ | 18-02-1918 |
| ಹರ್ಡೇಕರ್ ಮಂಜಪ್ಪ | 18-02-1889 |
| ಡಿ. ಆರ್. ನಾಗರಾಜ್ | 20-02-1954 |
| ಪಂಜೆ ಮಂಗೇಶರಾವ್ | 22-02-1874 |

### ಫೆಬ್ರವರಿ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಎ.ಆರ್. ಕೃಷ್ಣಶಾಸ್ತ್ರಿ | 01-02-1968 |
| ನಾ. ಕಸ್ತೂರಿ ಸಂಸ | 14-02-1939 |
| ಎಸ್.ವಿ. ರಂಗಣ್ಣ | 18-02-1987 |
| ರಂ ಶ್ರೀ ಮುಗಳಿ | 20-02-1993 |
| ಟಿ.ಎಸ್. ವೆಂಕಣ್ಣಯ್ಯ | 24-02-1939 |
| ಆಲೂರು ವೆಂಕಟರಾಯರು | 25-02-1964 |

## ಆಧುನಿಕ ವಚನಗಳು

-ಜಿ. ಅಬ್ದುಲ್ ಬಷೀರ್

'ಜಾತಿ' ಬಲದಿಂದ ಮುನ್ನುಗ್ಗುವವರ ಕಂಡು ನಗುತಿದ್ದೆ!
'ಧನ' ಬಲದಿಂದ ಮುನ್ನುಗ್ಗುವವರ ಕಂಡು ನಗುತಿದ್ದೆ!
'ಜನ' ಬಲದಿಂದ ಮುನ್ನುಗ್ಗುವವರ ಕಂಡು ನಗುತಿದ್ದೆ!
'ನಾ' ಯಾತರ ಬಲದಿಂದ ಮುನ್ನುಗ್ಗಲಿ ದೇವಾ!
'ನಾ ನನ್ನ ಸ್ವಂತ ಬಲದಿಂದ'ಮುನ್ನುಗ್ಗಿ
ಬೆಳೆಯುವಂತೆ 'ಕರುಣೆಸೋ ಅಲ್ಲಾರಖ' ॥16॥

## ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಮಾನ್ಯತೆ




ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಕಳೆದ ಹಲವು ದಶಕಗಳಿಂದ ನಿಯಮಿತವಾಗಿ ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಭಾರತೀಯ ಭಾಷಾ ಸಂಸ್ಥಾನ, ಮೈಸೂರು (ಕೇಂದ್ರ ಸರ್ಕಾರದಉನ್ನತ ಶಿಕ್ಷಣ ಇಲಾಖೆ, ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ) ಇವರಿಂದ "ಕಿರು ಪತ್ರಿಕೆ" ಅನುದಾನ ಯೋಜನೆಯಡಿಯಲ್ಲಿ ಮಾನ್ಯತೆ ದೊರಕಿರುತ್ತದೆ. ಈ ಯೋಜನೆಯಡಿಯಲ್ಲಿ ಇನ್ನು ಮುಂದೆ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಯನ್ನು ಪ್ರಕಟಿಸಲು ಪ್ರತಿ ವರ್ಷ ರೂ.20000/- ಅನುದಾನವನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ಬಿಡುಗಡೆ ಮಾಡಲಾಗುತ್ತದೆ. ಈ ವರ್ಷದ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು 1983ರಿಂದ ನಿರಂತರವಾಗಿ ಪ್ರಕಟಿಸಿಕೊಂಡು ಬರುತ್ತಿರುವ ಷಾಣ್ಮಾಸಿಕ ವಿದ್ವತ್ ಪತ್ರಿಕೆಕರ್ನಾಟಕ ಲೋಚನ ಪತ್ರಿಕೆಯಲ್ಲಿ ವಿದ್ವಾಂಸರಿಂದ ರಚಿತವಾದ ಸಾಹಿತ್ಯ-ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ/ಸಂಶೋಧನಾತ್ಮಕ ಲೇಖನಗಳನ್ನು ಪ್ರಕಟಿಸಲಾಗುತ್ತಿದೆ. ಇಡೀ ಕರ್ನಾಟಕದಲ್ಲಿ ಗುಣಮಟ್ಟವನ್ನು ಕಾಪಾಡಿಕೊಂಡು ನಿಯತವಾಗಿ ಪ್ರಕಟಗೊಳ್ಳುತ್ತಿರುವ ಕೆಲವೇ ವಿದ್ವತ್ ಪತ್ರಿಕೆಗಳಲ್ಲಿ ಕರ್ನಾಟಕಲೋಚನ ವಿದ್ವತ್ ಪತ್ರಿಕೆಒಂದಾಗಿರುತ್ತದೆ.

ಪ್ರಾರಂಭದಿಂದಲೂ ಗುಣಮಟ್ಟವನ್ನು ಕಾಪಾಡಿಕೊಂಡು ಬರುತ್ತಿರುವ ಸಂಪಾದಕ ಮಂಡಳಿಗಳಿಗೆ ಅಭಿನಂದನೆಗಳು ಸಲ್ಲುತ್ತವೆ. ಗೌರವಾನ್ವಿತ ವಿದ್ವಾಂಸರು ಹಾಗೂ ಸಂಶೋಧನಾ ವಿದ್ಯಾರ್ಥಿಗಳು ಕರ್ನಾಟಕ ಲೋಚನದ ಸಂಚಿಕೆಗಳನ್ನು ತಮ್ಮ ಮಹಾ ಪ್ರಬಂಧಗಳಲ್ಲಿ, ಸಂಶೋಧನಾ ಲೇಖನಗಳಲ್ಲಿ ಉಲ್ಲೇಖಿಸಿರುತ್ತಿರುತ್ತಾರೆ. ಕರ್ನಾಟಕ ಲೋಚನವು ಸಂಶೋಧನಾ ವಿದ್ಯಾರ್ಥಿಗಳು, ಎಂಫಿಲ್, ಪಿಎಚ್‌ಡಿ ವಿದ್ಯಾರ್ಥಿಗಳು ಹಾಗೂ ಇತರ ಆಸಕ್ತರಿಗೆ ಉತ್ತಮ ಗುಣಮಟ್ಟದ ಇತಿಹಾಸ, ಸಂಸ್ಕೃತಿ, ಜಾನಪದ, ವಿಮರ್ಶೆ, ಸಂಶೋಧನಾ ಚಟುವಟಿಕೆಗಳು, ತೌಲನಿಕ ಅಧ್ಯಯನಗಳನ್ನು ಪ್ರಕಟಿಸಲು ಪ್ರೋತ್ಸಾಹಿಸುತ್ತಿದ್ದು ಹೊಸ ಆಲೋಚನೆಗಳ ಹೊಸ ಮಾರ್ಗಗಳನ್ನು ತೋರಿಸಲು ಸಾಧ್ಯ ಮಾಡಿಕೊಡುತ್ತಿದೆ. ಕೆಲವು ಸಂಚಿಕೆಗಳನ್ನು ನಾಡಿನ ಗೌರವಾನ್ವಿತ ವಿದ್ವಾಂಸರ ಕೊಡುಗೆಗಳ ನೆನಪಿಗಾಗಿ ಮೀಸಲಿಡಲಾಗುತ್ತಿದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ದತ್ತಿ ಕಾರ್ಯಕ್ರಮದಡಿಯಲ್ಲಿನ ಉತ್ತಮ ಉಪನ್ಯಾಸಗಳ ಪಠ್ಯಗಳನ್ನು ಇದರಲ್ಲಿ ಪ್ರಕಟಿಸಲಾಗುತ್ತಿದೆ.

## ಜನವರಿ 2017 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

**ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ**



**01–02–2017 ಬುಧವಾರ ಸಂಜೆ– 6–00**

**ಗಮಕವಾಹಿನಿ–13**

**ಕುಮಾರ ವ್ಯಾಸಭಾರತದಿಂದ 'ದ್ರೌಪದಿ ವಿಜಯ'**

ಭಾಗವಹಿಸುವವರ ಹೆಸರು– ಶ್ರೀಮತಿ ಶ್ರೀಮತಿಜಯರಾಂ, ರೇಖಾ ಪ್ರಸಾದ್, ಶ್ರೀದೇವಿ ಅಯ್ಯಂಗಾರ್
ಸುಮಾ ಸುದರ್ಶನ್, ಹೇಮಾ ರವಿಶಂಕರ, ದೀಪ್ತಿ ನೇತೃತ್ವ– ಶ್ರೀಮತಿ ಜಯರಾಂ



**9–02–2017 ಗುರುವಾರ ಸಂಜೆ 6:00 ಕ್ಕೆ**

**ಕನ್ನಡ ಸಂಸ್ಕೃತಿ ದರ್ಶನ**

ಸಾಕ್ಷ್ಯಚಿತ್ರ ಪ್ರದರ್ಶನ – ರಾಷ್ಟ್ರಕವಿ ಜಿ.ಎಸ್. ಶಿವರುದ್ರಪ್ಪ ಹಾಗೂ ಡಾ॥ ಗೋಪಾಲಕೃಷ್ಣ ಅಡಿಗ





**15–02–2017 ಬುಧವಾರ ಸಂಜೆ –6–00ಗಂಟೆಗೆ**

**ಅಕ್ಕರಗೊಟ್ಟಿ**

ಚಾಲನೆ : ಡಾ. ಪ್ರಮೀಳಾ ಮಾಧವ್
ನಿವೃತ್ತ ಕನ್ನಡ ಪ್ರಾಧ್ಯಾಪಕರು, ಸುಪ್ರಸಿದ್ಧ ವಿಮರ್ಶಕರು
ವಿಷಯ – 'ಪದ್ಯಂ ವದ್ಯಂ, ಗದ್ಯಂ ಹೃದ್ಯಂ'





**20–02–2017 ಸೋಮವಾರ ಸಂಜೆ–6–00**

**ಡಾ. ಎಂ.ಎ. ಜಯಚಂದ್ರ ದತ್ತಿ ಕಾರ್ಯಕ್ರಮ**

ಉಪನ್ಯಾಸಕರು : ಡಾ. ಜೆ. ಶ್ರೀನಿವಾಸ ಮೂರ್ತಿ
ಸಂಸ್ಕೃತ ಪ್ರಾಧ್ಯಾಪಕರು
ವಿಷಯ : 'ಭಾಷೆ ಮತ್ತು ಕಾವ್ಯದ ಬಗ್ಗೆ ಜೈನ ಚಿಂತನೆಗಳು'





**25–02–2017 ಶನಿವಾರ ಸಂಜೆ 6 :00 ಕ್ಕೆ**

**ನಾಟಕ : ಫಸ್ಟ್ ರ್‍ಯಾಂಕ್**

ರಚನೆ : ಶ್ರೀ ವಿಜಯ್ ಎ.
ನಿರ್ದೇಶನ : ಶ್ರೀ ವಿಜಯ್ ಎ.



**28–02–2017 ಮಂಗಳವಾರ ಸಂಜೆ 6:00**

**ಡಾ॥ ಆ.ನೇ ಉಪಾಧ್ಯೆ, ಡಾ.ಡಿ. ಎಲ್. ನರಸಿಂಹಾಚಾರ್ ಮತ್ತು**
**ಶ್ರೀ ಎಂ.ಜಿ. ನಂಜುಂಡಾರಾಧ್ಯ ದತ್ತಿಕಾರ್ಯಕ್ರಮ**

ಉಪನ್ಯಾಸಕರು : ಪ್ರೊ. ಆರ್. ಸಿ. ಕುಲಕರ್ಣಿ
ವಿಷಯ :'ಬೇಂದ್ರೆ ಕಾವ್ಯದಲ್ಲಿ ದಾಂಪತ್ಯ'

## ಎಂ.ವಿ.ಸೀ. ಬಗ್ಗೆ ಸಾಹಿತ್ಯ ಅಕಾಡೆಮಿಯ ಪ್ರಕಟಣೆ

ನವದೆಹಲಿಯ ಕೇಂದ್ರ ಸಾಹಿತ್ಯ ಅಕಾಡೆಮಿಯು 'ಭಾರತೀಯ ಸಾಹಿತ್ಯ ನಿರ್ಮಾಪಕರು' ಮಾಲಿಕೆಯಲ್ಲಿ 2016ರ ಪ್ರಕಟಣೆಯಾಗಿ 'ಎಂ.ವಿ. ಸೀತಾರಾಮಯ್ಯ' ಪುಸ್ತಕವನ್ನು ಪ್ರಕಟಿಸಿದೆ.

ಡಾ॥ ಪಿ.ವಿ. ನಾರಾಯಣ ಈ ಕೃತಿಯ ಲೇಖಕರು. ಅನುಬಂಧಗಳನ್ನೂ ಸೇರಿದಂತೆ ಹತ್ತು ಅಧ್ಯಾಯಗಳಿರುವ, ಸುಮಾರು 140 ಪುಟಗಳನ್ನು ಹೊಂದಿರುವ ಈ ಗ್ರಂಥದಲ್ಲಿ ಎಂ.ವಿ.ಸೀ. ಅವರ ಬದುಕಿನ ಕಿರು ವಿವರವಲ್ಲದೆ, ಅವರ ಎಲ್ಲ ಸಾಹಿತ್ಯ ಪ್ರತಿಗಳ ಬಗೆಗೆ ಸಮೀಕ್ಷಾತ್ಮಕವೂ, ವಿಮರ್ಶಾತ್ಮಕವೂ ಆದ ವಿವರಗಳಿವೆ. ಗ್ರಂಥದ ಬೆಲೆ ರೂ. 50/–.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಡಿಸೆಂಬರ್ 2016 – ಜನವರಿ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## "ರಂಗ ಸಂವಾದ–5"

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಾಟಕ

ನಾಟಕ : ಪೋಷಕರೇ ಎಚ್ಚರ ಅಮೋಘ"100 ನೇ" ಪ್ರದರ್ಶನ

ರಚನೆ ಮತ್ತು ನಿರ್ದೇಶನ : ಶ್ರೀ ವಿಜಯ್ .ಎ



ಪ್ರತಿ ತಿಂಗಳೂ ಕೊನೆಯ ಶನಿವಾರ ಸಂಜೆ ನಡೆಯುವ ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ 'ರಂಗ ಸಂವಾದ' ಕಾರ್ಯಕ್ರಮದಲ್ಲಿ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ.24–12–2016 ರಂದು ಈ ಮಾಲೆಯ ನಾಟಕ ಮಕ್ಕಳ ಸುರಕ್ಷತೆ ಕುರಿತಾದ "ಪೋಷಕರೇ ಎಚ್ಚರ" ಎಂಬ ನಾಟಕದ ಅಮೋಘ"100 ನೇ" ಪ್ರದರ್ಶನ ಮಾಡಲಾಯಿತು.

ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಯಾಗಿ ಡಾ. ಜಿ. ರಾಮಕೃಷ್ಣ ಅವರು ಆಗಮಿಸಿ ನಾಟಕ ರಂಗದ ಬಗ್ಗೆ ಕೆಲವು ವಿಷಯಗಳ ಪ್ರಸ್ತಾಪ ಮಾಡಿ ರಂಗಸಂವಾದ ಕಾರ್ಯಕ್ರಮದ ಬಗ್ಗೆ ಮೆಚ್ಚುಗೆ ಸೂಚಿಸಿದರು. ಮೊದಲಿಗೆ ಡಾ.ಪಿವಿ ನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನು ಆಡಿ ಅತಿಥಿಗಳ ಪರಿಚಯ ಮಾಡಿಕೊಟ್ಟರು.ಪ್ರೊ.ಅಬ್ದುಲ್ ಬಶೀರ್ ವಂದನಾರ್ಪಣೆ ಸಲ್ಲಿಸಿದರು.

## 'ಪುಟ್ಟಚ್ಚಮ್ಮ–ಸಾರಂಗಿ ವೆಂಕಟರಾಮಯ್ಯ' ದತ್ತಿ ಪುಸ್ತಕ ಬಹುಮಾನ




ದಿನಾಂಕ 28–12–2016ರಂದು ಶ್ರೀ ಎಸ್ ವಿ.ಶ್ರೀನಿವಾಸರಾವ್ ಅವರು ಸ್ಥಾಪಿಸಿರುವ ರೂ. 3000/– ಬಹುಮಾನದ ಮೊತ್ತದ 'ಪುಟ್ಟಚ್ಚಮ್ಮ–ಸಾರಂಗಿ ವೆಂಕಟರಾಮಯ್ಯ' ದತ್ತಿಯ ಪುಸ್ತಕ ಬಹುಮಾನವು ಶ್ರೀ ಎಚ್. ನಾಗರಾಜ್ ಹಳ್ಳಿಕಾರ್ ಅವರ 'ಈಚಲ ಗುಡ್ಡ' ಎಂಬ ನಾಟಕಕ್ಕೆ ನೀಡಲಾಯಿತು.

ದತ್ತಿ ಸ್ಥಾಪಕರಾದ ಶ್ರೀ ಎಸ್ ವಿ. ಶ್ರೀನಿವಾಸರಾವ್ ಹಾಗೂ ಕುಟುಂಬ ವರ್ಗದವರು ಮತ್ತು ಶ್ರೀ ಎಚ್.ನಾಗರಾಜ್ ಹಳ್ಳಿಕಾರ್ ಅವರ ಅಭಿಮಾನಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದರು.

## ರಂಗನಾಯಕಮ್ಮ ಮತ್ತು ಶ್ರೀ ಸುಬ್ಬರಾವ್ ದತ್ತಿ ಕಾರ್ಯಕ್ರಮ ದೇವರ ನಾಮ ಗಾಯನ

6–01–2017 ರಂದು ರಂಗನಾಯಕಮ್ಮ ಮತ್ತು ಶ್ರೀ ಸುಬ್ಬರಾವ್ ದತ್ತಿ ಕಾರ್ಯಕ್ರಮದಡಿಯಲ್ಲಿ ದೇವರ ನಾಮ ಗಾಯನವನ್ನು ಕುಮಾರಿ ತೇಜಸ್ವಿನಿ ಗೌರಿ ಮತ್ತು ಸಂಗಡಿಗರು ನಡೆಸಿಕೊಟ್ಟರು.ಶ್ರೀಮತಿ ಶುಭಮಂಗಳ ರಘುನಂದನ ಅವರ ಶಿಷ್ಯೆಯಾಗಿರುವ ಕುಮಾರಿ ತೇಜಸ್ವಿನಿ ಗೌರಿ ಅವರ ಜೊತೆ ಡಾ.ಲಕ್ಷ್ಮಿನಾರಾಯಣ ಅವರು ವಯೋಲಿನ್ ಹಾಗೂ ಶ್ರೀ ಅಶ್ವತ್ಥನಾರಾಯಣ ಅವರು ಮೃದಂಗದ ಪಕ್ಕವಾದ್ಯ ಬೆಂಬಲ ನೀಡಿದರು.

ಮೊದಲಿಗೆ ಡಾ. ಪಿ.ವಿ. ನಾರಾಯಣ ಅವರು ಕಲಾವಿದರ ಪರಿಚಯ ಮಾಡಿಕೊಟ್ಟು ಎಲ್ಲರಿಗೂ ಸ್ವಾಗತವನ್ನು ಕೋರಿದರು.ಪ್ರೊ.ಅಬ್ದುಲ್ ಬಶೀರ್ ಅವರು ವಂದನಾರ್ಪಣೆ ಸಲ್ಲಿಸಿದರು.

ಕುಮಾರಿ ತೇಜಸ್ವಿನಿ ಗೌರಿ ತಿಲಾಂಗ್ ರಾಗದಲ್ಲಿ ಮಹಾಗಣಪತೀಂ –– ಹಾಡಿನಿಂದ ತಮ್ಮ ಹಾಡುಗಾರಿಕೆಯನ್ನು ಪ್ರಾರಂಭಿಸಿ ನಂತರ ರಾಗ ಚಕ್ರವಾಕದಲ್ಲಿ ಪುರಂದರದಾಸರ ಮುಯ್ಯಿಗೆ ಮಯ್ಯಿ... ದೇವರ ನಾಮವನ್ನು ಹಾಡಿದರು. ವಾದಿರಾಜರು ರಚಿಸಿದ ಆಹಿರ್ ಭೈರವಿಯಲ್ಲಿ ಪ್ರಸ್ತುತಪಡಿಸಿದ "ವೇಣಿ ಮಾಧವನ .."ಹಾಡು ಕೇಳುಗರ ಮನಸೂರೆಗೊಂಡಿತು. ಅಂದು ಬಹಳ ಸೂಕ್ತವಾಗಿ ಆಯ್ಕೆಮಾಡಲಾದ ಒಟ್ಟು ಹನ್ನೆರಡು ದೇವರನಾಮಗಳನ್ನು ಪ್ರಸ್ತುತಪಡಿಸಿದ ಕುಮಾರಿ ತೇಜಸ್ವಿನಿ ಗೌರಿ ಅವರು ಸರಾಗವಾಗಿ ಹಾಡಿ ತಮ್ಮ ಹಾಡುಗಾರಿಕೆ ಸಾಮರ್ಥ್ಯವನ್ನು ಪ್ರದರ್ಶಿಸಿದರು. ಪ್ರತಿಯೊಂದು ದೇವರನಾಮಕ್ಕೂ ಬೇರೆ ಬೇರೆ ರಾಗಗಳನ್ನು ಆಯ್ಕೆ ಮಾಡಿದ ಅವರು ಮಾಂಡ್, ರಾಗಮಾಲಿಕಾ, ಕ್ರ್ಣರಂಜಿನಿ, ಶುದ್ಧಸಾರಂಗ, ಮಧುವಂತಿ, ಬೇಹಾಗ್, ಸಿಂಧುಭೈರವಿ ಆಹಿರ್ ಭೈರವಿ, ಸೌರಾಷ್ಟ್ರ ರಾಗಗಳಲ್ಲಿ ತಮಗಿರುವ ಹಿಡಿತವನ್ನು ಪ್ರದರ್ಶಿಸಿದರು.ಜೊತೆಗೆ ಪುರಂದರದಾಸರು, ದಯಾನಂದ ಸ್ವಾಮಿ, ಹರಪನಹಳ್ಳಿ ಭೀಮವ್ವ ಹಾಗೂ ವಾದಿರಾಜರ ಕೃತಿಗಳನ್ನು ಆಯ್ಕೆ ಮಾಡಿ ಕೇಳುಗರಿಗೆ ಭಕ್ತಿ ಭಾವದ ಪರಿಚಯವನ್ನು ಮಾಡಿಕೊಟ್ಟರು.

ಶ್ರೀ ಗೋಪಾಲ ಕೃಷ್ಣ ಹಾಗೂ ಶ್ರೀಮತಿ ಸುಜಾತ ಅವರ ಪುತ್ರಿ, ಸಾಫ್ಟ್ ವೇರ್ ಎಂಜಿನಿಯರ್, ಯುವ ಪ್ರತಿಭೆ ಕುಮಾರಿ ತೇಜಸ್ವಿನಿ ಗೌರಿ ಸಂಗೀತ ಕಲಿಕೆಯಲ್ಲಿ ಉತ್ತಮ ಮಟ್ಟದ ಸಾಮರ್ಥ್ಯ, ಸಾಧನೆ ಹಾಗೂ ಸಾಕಷ್ಟು ಪರಿಶ್ರಮ ಹೊಂದಿರುವುದನ್ನು ಸಾಬೀತುಪಡಿಸಿದರು.ಅವರ ಹಾಡುಗಾರಿಕೆಯನ್ನು ಆಲಿಸಲು ಇಡೀ ಸಭಾಂಗಣ ತುಂಬಿತ್ತು.

## ಗಮಕವಾಹಿನಿ–11 – 7–01–2017




7–01–2017ರಂದು ಪ್ರತಿ ತಿಂಗಳ ಮೊದಲ ಬುಧವಾರ ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ ಅಡಿಯಲ್ಲಿ ಉದಯೋನ್ಮುಖ ಕಲಾವಿದರುಗಳಾದ ಕುಮಾರಿ ಭವ್ಯಾ ಮತ್ತು ಕುಮಾರಿ ರಂಜಿನಿ ನಡೆಸಿಕೊಟ್ಟರು. ಕನ್ನಡದ ಮಹಾನ್ ಕಾವ್ಯವಾದ ಕವಿ ಕುಮಾರವ್ಯಾಸನ 'ಕರ್ಣಾಟ ಭಾರತ ಕಥಾ ಮಂಜರಿ' ಯ ಆದಿಪರ್ವದ 'ಬಕಾಸುರ ವಧೆ ಯ ಆಯ್ದ ಪದ್ಯದ ವಾಚನವನ್ನು 6 ನೇ ತರಗತಿಯ ವಿದ್ಯಾರ್ಥಿನಿ ಕಿಶೋರಿ ರಂಜಿನಿ ಅತ್ಯಂತ ಆಕರ್ಷಕವಾಗಿ ಸ್ಪಷ್ಟ ಉಚ್ಚಾರ್ಣೆ, ಶ್ರುತಿಬದ್ಧವಾಗಿ ವಾಚಿಸಿ ಸಭಿಕರ ಮನರಂಜಿಸಿ, ಮೆಚ್ಚುಗೆ ಗಳಿಸುವಲ್ಲಿ ಯಶಸ್ವಿಯಾದರು. ಉಪನ್ಯಾಸಕಿಯಾದ ಕು. ಭವ್ಯ ವ್ಯಾಖ್ಯಾನ ಕಲೆಯಲ್ಲಿ ಆಸಕ್ತಿ ಹೊಂದಿದ್ದು, ವ್ಯಾಖ್ಯಾನ ಕ್ಷೇತ್ರಕ್ಕೆ ಪ್ರವೇಶಮಾಡಿ ಕಾರ್ಯಕ್ರಮವನ್ನು ನೀಡುತ್ತಿರುವ ಯುವಕಲಾವಿದೆ. ಅವರ ವ್ಯಾಖ್ಯಾನವು ಈ ಕ್ಷೇತ್ರದಲ್ಲಿ ಉತ್ತಮ ಕಲಾವಿದೆಯಾಗುವ ಭರವಸೆಯನ್ನು ನೀಡುವಂತಿದ್ದು ಒಟ್ಟಾರೆ ಕಾರ್ಯಕ್ರಮವು ಎಲ್ಲರ ಮನ ರಂಜಿಸಿತು.

## ದಿ॥ ಬಿ.ಎಸ್. ಗೋಪಾಲರಾವ್ – ವೇದಾವತಿ ಬಾಯಿ ದತ್ತಿ ಕಾರ್ಯಕ್ರಮ – ಗಮಕ ವ್ಯಾಖ್ಯಾನ




ದಿನಾಂಕ 15–01–2017 ರಂದು ಶ್ರೀಮತಿ ಬಿ.ಜಿ. ಕುಸುಮಾ ಅವರು ಸ್ಥಾಪಿಸಿರುವ ದಿ॥ ಬಿ.ಎಸ್. ಗೋಪಾಲರಾವ್ – ವೇದಾವತಿ ಬಾಯಿ ದತ್ತಿ ಕಾರ್ಯಕ್ರಮದಲ್ಲಿ ರನ್ನನ ಗದಾಯುದ್ಧದ ಆಯ್ದ ಭಾಗಗಳ ಸುಶ್ರಾವ್ಯ ವಾಚನವನ್ನು ಶ್ರೀ ಚಂದ್ರಶೇಖರ ಕೆದಿಲಾಯ ನಡೆಸಿಕೊಟ್ಟರು ಹಾಗೂ ಶ್ರೀಮತಿ ಶಾಂತಗೋಪಾಲ್ ಅವರು ಸವಿವರವಾಗಿ ವ್ಯಾಖ್ಯಾನ ಗಳನ್ನು ನಡೆಸಿಕೊಟ್ಟರು. ಮೊದಲಿಗೆ ಡಾ.ಪಿವಿ ನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನು ಆಡಿ ಅತಿಥಿಗಳ ಪರಿಚಯ ಮಾಡಿಕೊಟ್ಟರು.ಪ್ರೊ. ಅಬ್ದುಲ್ ಬಶೀರ್ ವಂದನಾರ್ಪಣೆ ಸಲ್ಲಿಸಿದರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ 13ನೇ ಜನವರಿ 2017 ರಂದು ದ.ರಾ.ಬೇಂದ್ರೆಅವರ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.ದ.ರಾ. ಬೇಂದ್ರೆ ಅವರು ಜನವರಿ ತಿಂಗಳಿನಲ್ಲಿ ಜನಿಸಿದ್ದರು. ಅವರ ನೆನಪಿನಲ್ಲಿ ಈ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

## ಅಕ್ಕರಗೊಟ್ಟಿ

(ತಿಂಗಳ ಮುಕ್ತ ಸಾಂಸ್ಕೃತಿಕಚಿಂತನೆ)

**ದಿನಾಂಕ 17–01–2017**




ದಿನಾಂಕ 16–01–2017ಎಂ.ಎನ್. ಪ್ರಭಾಕರ್ ,ಮೈಸೂರು ಅವರು "ಅಗ್ರಹಾರಗಳು ಮತ್ತು ಪೂರ್ವಾಪರಗಳು" ಎಂಬ ವಿಷಯದ ಬಗ್ಗೆ, ಅಗ್ರಹಾರ ಪದದ ವ್ಯುತ್ಪತ್ತಿ, ಅನೇಕ ಕಾಲಘಟ್ಟಗಳಲ್ಲಿ ಅಗ್ರಹಾರದ ಸ್ವರೂಪ, ಆಡಳಿತ ವ್ಯವಸ್ಥೆ, ಬದಲಾದ ಅಗ್ರಹಾರಗಳ ವ್ಯವಸ್ಥೆ, ವಿಜಯನಗರ ಪೂರ್ವಾಕಾಲದ ಮತ್ತು ವಿಜಯನಗರೋತ್ತರ ಕಾಲದ ಅಗ್ರಹಾರಗಳು ಹೀಗೆ ಚರ್ಚೆಗೆ ಚಾಲನೆ ನೀಡಿದರು. ಇತಿಹಾಸ ಆಸಕ್ತರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ, ಚರ್ಚೆಯನ್ನು ಅರ್ಥಪೂರ್ಣವಾಗಿ ನಡೆಸಿಕೊಟ್ಟರು.

ನಮ್ಮ ಸದಸ್ಯರುಗಳಾದ ಡಾ॥ ಶ್ಯಾಮಲಾರತ್ನಕುಮಾರಿ, ಡಾ॥ ಎಸ್.ವಿ. ಶ್ರೀನಿವಾಸ್, ಡಾ॥ ಗಣೇಶ್‌ಕೆ. ಆರ್. ಶ್ರೀ ಡಿ.ನಂ. ವೆಂಕಟರಮಣಯ್ಯ, ಡಾ. ಪಿ.ವಿ.ಕೃಷ್ಣಮೂರ್ತಿ, ಡಾ.ಪಿ.ವಿ.ನಾರಾಯಣ ಶ್ರೀಮತಿ ಸಂಧ್ಯಾ ಕೌಶಿಕ್, ಡಾ॥ನಳಿನಿ ವೆಂಕಟೇಶ್, ಮುಂತಾದವರು ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು.

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

**ಕುದುರು:** ಕನ್ನಡದ ಈ ಶಬ್ದವು ಕಣಜ ಎಂಬರ್ಥದ ಸಂಸ್ಕೃತದ 'ಕೃದರ'ದ ತದ್ಭವ. ಕುದಿರ್, ಕುದಿರು ಕುದುರು ಮುಂತಾದ ರೂಪಗಳಲ್ಲಿ ಬಳಕೆಯಾಗಿರುವ ಇದರ ಅರ್ಥವು ಭಿನ್ನವಾಗಿದೆ. "ಕುಶೂಲಂ ಕುದಿರ್ ಅಜಿಗೆ" ಎನ್ನುತ್ತದೆ 'ಅಭಿಧಾನ ವಸ್ತುಕೋಶ'.ಬಿದಿರಿನ ತಟ್ಟಿಯನ್ನು ಗುಂಡಗೆ ಕಟ್ಟಿ ಮಣ್ಣು ಲೇಪಿಸಿದ ಕಣಜವೇ ಕುದುರು."ಕುದುರನೇಸು ತೊಳೆದಡೆಯೂ ಕೆಸರು ಮಾಬುದೆ?"ಎಂಬ ಬಸವಣ್ಣನ ಮಾತು ಇದನ್ನು ಸೂಚಿಸುತ್ತದೆ. ಕುದಿರ್ ಎಂಬುದಕ್ಕೆ ಗೋಡೆ ಎಂಬರ್ಥವೂ ಇದೆ: "ಕುದಿರೊಳ್ ಕಳ್ಳವನಿಕ್ಕಿಸಿ" – 'ಯಶೋಧರ ಚರಿತೆ). ದವಸವನ್ನು ಕುಟ್ಟುವಾಗ ಒರಳಿನಿಂದ ಹೊರಚೆಲ್ಲದಂತೆ ಇಡುತ್ತಿದ್ದ ಬಿದಿರು ಅಥವಾ ಮರದ ಸುತ್ತು ಕುದುರು. ಹಗ್ಗದ ಸಿಂಬೆಯನ್ನೂ ಕುದಿರು ಎಂಬ ಶಬ್ದ ಸೂಚಿಸುತ್ತದೆ. ಕಣ್ಣ ಕುದುರು ಎಂಬ ಸಮಾಸದಲ್ಲಿನ ಕುದುರು ಶಬ್ದಕ್ಕೆ ಕುಳಿ ಎಂಬ ಅರ್ಥವಿದೆ.ಕುದುರು ಎಂಬುದನ್ನು ನದಿಯ ಪಾತ್ರ ಎಂಬರ್ಥದಲ್ಲಿ ಕುವೆಂಪು 'ಶ್ರೀ ರಾಮಾಯಣ ದರ್ಶನಂ'ನಲ್ಲಿ ಬಳಸುತ್ತಾರೆ ("ಕೋಟಿ ಕಣ್ಣುಗಳೊಡ್ಡಿದೊಂದು ಕುದುರಿಗೆ ಕೆಡೆದು").ತುಳುವಿನಲ್ಲಿ ಈ ಶಬ್ದಕ್ಕೆ ಸಣ್ಣದ್ವೀಪ ಎಂಬರ್ಥವಿದೆಯಂತೆ.ಕನ್ನಡದಲ್ಲೂ ಇದರ ಬಳಕೆಯಿದೆ.ಒರಳಿನ ಸುತ್ತ ಇರುವ ಕುದುರು ಎಂಬುದು ಇದರಿಂದ ಪ್ರೇರಿತವಾಗಿರಬಹುದೇ?

ನೆಲೆಯಾಗು ಎಂಬ ಕ್ರಿಯಾರ್ಥದಲ್ಲಿ ಕುದುರು ಎಂಬ ಶಬ್ದ ಬಳಕೆಯಾಗುತ್ತದೆ.ತಮಿಳಿನಲ್ಲಿದು ಕುದಿರ್ ಆದರೆ ತೆಲುಗಿನಲ್ಲಿ ಕುದುರು ಎಂದೂ ತುಳುವಿನಲ್ಲಿ ಕುದುರುಣಿ ಎಂದೂ ಆಗುತ್ತದೆ. ಸ್ತಿಮಿತಕ್ಕೆ ಬರು ಎಂಬರ್ಥವೂ ಇದಕ್ಕಿದೆ. "ವ್ಯಾಪಾರ ಕುದುರಿತು" ಎಂಬಂತಹ ಕಡೆ ಇದನ್ನು ಕಾಣಬಹುದು. ಒಪ್ಪಿಗೆಯಾಗು ಎಂಬರ್ಥವು 'ಮದುವೆ ಕುದುರಿತು' ಎಂಬಂತಹ ಕಡೆಗಳಲ್ಲಿ ಕಾಣಬಹುದು.

ಕುದುರಿಸು ಎಂಬ ಪ್ರೇರಣಾರ್ಥದಲ್ಲಿಯೂ ಈ ಶಬ್ದದ ಬಳಕೆಯಿದೆ.ಏಳಿಗೆ ಹೊಂದು ಎಂಬರ್ಥ ಇದರದ್ದು.'ವಿದ್ಯಾರ್ಥಿಗಳಲ್ಲಿ ಆಸಕ್ತಿ ಕುದುರಿಸುವುದು' ಎಂಬಂತಹ ಪ್ರಯೋಗವಿದೆ. 'ಕುದುರುಗೊಳಿಸು' ಎಂಬುದನ್ನು ಸರಿಹೊಂದಿಸು ಎಂಬರ್ಥದಲ್ಲಿ ಬಳಸುವುದುಂಟು.ಸರಿಹೊಂದುವ ಕ್ರಮವೇ 'ಕುದುರುಗೊಳ್ಳು'. ವ್ಯವಸ್ಥೆಗೊಳಿಸು ಎಂಬರ್ಥದಲ್ಲಿ 'ಕುದುರುಪಾಟು' ಎಂಬ ಸಮಾಸದ ಬಳಕೆಯಿದೆ.

=====

**ಕುದುರೆ:** ಈ ಶಬ್ದವು ತಮಿಳಿನಲ್ಲಿ ಕುದಿರೈ ಎಂದೂ, ಮಲಯಾಳಂನಲ್ಲಿ ಕುದಿರ ಎಂದೂ ತುಳುವಿನಲ್ಲಿ ಕುದುರೆ ಎಂದೂ ತೆಲುಗಿನಲ್ಲಿ ಕುದಿರ, ಗುಱಱ ಎಂದೂ ಬಳಕೆಯಲ್ಲಿದೆ. ಕನ್ನಡದಲ್ಲಿಯೂ ಕುದಿರೆ ಎಂಬ ರೂಪವೂ ಬಳಕೆಂಖಲ್ಲಿತ್ತು.ಸಮಾನಾರ್ಥಗಳನ್ನು ಕೊಡುವ 'ಅಭಿಧಾನ ವಸ್ತುಕೋಶ'ವು "ತುರಗಂ ಯಯು ಸಪ್ತಿ ಹಯಂ ತುರಂಗಮಂ ವಾಜಿ ವಾಹಂ ಅಶ್ವಂ ತಾರ್ಕ್ಷ್ಯಂ ಹರಿ ಘೋಟಕಮರ್ವಾಖ್ಯಂ ತುರಂಗಮೆನೆ ಕುದಿರೆ" ಎಂದು ಹೇಳುತ್ತದೆ. "ಬಿಲ್ವಿಲ್ಲಳ್ಕುದುರೆ ಕುದುರೆಯೊಳ್ಕಿಟ್ಟ ಅತಿತುಮುಲ ಕಾಳಗ ಪೆಟ್ಟಿ" ಎಂದು ಕ್ರಿಶ 800 ರ ಶಾಸನವೊಂದರಲ್ಲಿ ಬರುವ ಇದರ ಉಲ್ಲೇಖವೇ ಪ್ರಾಯಶಃ ಕನ್ನಡದಲ್ಲಿ ಅತ್ಯಂತ ಪ್ರಾಚೀನವಾದುದು. "ಕುದುರೆ ನಾಯ್ ಒಟ್ಟೆ ಉಡುವುಂ" ಎಂಬುದು 'ವಡ್ಡಾರಾಧನೆಯ' ಉಲ್ಲೇಖ."ಕುದುರೆಯ ಪಂದಿಯ ವಿಷ್ಠೆ"ಯನ್ನು ಬಾಳೆಗೊನೆಯು ದೊಡ್ಡದಾಗಿ ಬೆಳೆಯಲು ಬಳಸಿಕೊಳ್ಳುವ ವಿಧಾನವನ್ನು 'ಲೋಕೋಪಕಾರ' ವಿವರಿಸುತ್ತದೆ.

ಈ ಶಬ್ದಕ್ಕೆ ಈ ಪ್ರಾಣಿಯಲ್ಲದೆ ಬೇರೆ ಬೇರೆ ಅರ್ಥಗಳೂ ಇವೆ. ಹಿಂದಿನ ಕಾಲದ ಚತುರಂಗ ಸೈನ್ಯದಲ್ಲಿ ಕುದುರೆಯೂ ಒಂದಾದುದರಿಂದ ಅದನ್ನನುಕರಿಸಿ ಆಡುವ ಆಟವಾದ ಚತುರಂಗ ಅಥವಾ ಚದುರಂಗದಲ್ಲಿ ಒಂದು ಕಾಯಿಯ ಹೆಸರು ಕುದುರೆ. ಬಂದೂಕಿನ ಕೀಲನ್ನೂ [ಟ್ರಿಗರ್] ಕುದುರೆ ಎನ್ನುತ್ತಾರೆ. ಹಸಿರು ಬಣ್ಣದ ಮಿಡಿತೆಯ ಪ್ರಭೇದವೊಂದನ್ನೂ ಕುದುರೆ ಎನ್ನುತ್ತಾರೆ. ಕುದುರೆಯಾಕಾರದ ರಚನೆಯನ್ನು ಸೊಂಟದಲ್ಲಿ ಧರಿಸಿ ನಡೆದಾಡುವುದೇ ಕೀಲುಕುದುರೆಯಾಟ.

ಕುದುರೆ ಶಬ್ದವನ್ನೊಳಗೊಂಡ ಅನೇಕ ನುಡಿಗಟ್ಟುಗಳಿವೆ. "ಕುದುರೆ ಸತ್ತಿಗೆಯವರ ಕಂಡಡೆ ಹೊರಳಿಬಿದ್ದು ಕಾಲಹಿಡಿವರು" ಎಂಬ ಬಸವಣ್ಣನ ಮಾತಿನಲ್ಲಿ ಇದು ಅಧಿಕಾರಸ್ಥರು ಎಂಬ ಅರ್ಥ ಹೊಮ್ಮುತ್ತದೆ. ಕೋಟೆಯಲ್ಲಿ ಕುದುರೆ ನುಗ್ಗುವಷ್ಟು ಜಾಗವನ್ನು 'ಕುದುರೆಗಂಡಿ' ಎನ್ನುತ್ತಿದ್ದರು ("ನೀರಕಂಡಿಯ ಕುದುರೆಗಂಡಿಯ ತೆಱಪುಗಳುಮಂ ವಸುಷೇಣಂ ಬಳಸಿ ನೋಡುತ್ತುಂ" –'ಅನಂತನಾಥ ಪುರಾಣ').ಕುದುರೆಗಳನ್ನು ಬೆಳೆಸುತ್ತಿದ್ದ ಜಾಗ ಕುದುರೆಗಾವಲ್ ("ಕುದುರೆಗಾವಲ ಸುಭಟರನಿತರೊಳೊದಗಿ ಬಂದು" – ಜೈಮಿನಿ ಭಾರತ). ಕುದುರೆಯಂತೆ ಹೆಜ್ಜೆಯಿಡುವುದನ್ನು 'ಧರ್ಮಾಮೃತ'ವು 'ಕುದುರೆಗಾಲಿಕ್ಕು' ಎನ್ನುತ್ತದೆ (ಮೂಱುಂ ದೇವರಂ ಬಂದಿಸುತ್ತುಂ ಮತ್ತಂ ಕುದುರೆಗಾಲಿಕ್ಕುತ್ತುಂ). ಕುದುರೆಯ ಮೇಲೆ ಹಾಕುತ್ತಿದ್ದ ಸುಂಕವನ್ನು ಶಾಸನಗಳು 'ಕುದುರೆಯ ಸೇಸೆ' ಎನ್ನುತ್ತವೆ ("ಕುದುರೆಯ ಸೇಸೆ ಗ 5 ಪ 9 ಹಾ 3") [ಗ=ಗದ್ಯಾಣ, ಪ=ಪಣ, ಹಾ=ಹಾಗ ಎಂಬ ನಾಣ್ಯಗಳು]. "ಏರಿದೇರಿದನೇರಿ ಗಾಳಿಗುದುರೆ ಸವಾರಿ ಸೂರ್ಯ ಸೇರಿ" ಎಂದು ಬೇಂದ್ರೆಯವರು ಬುದ್ಧನ ಆಧ್ಯಾತ್ಮಿಕ ಸಾಧನೆಯನ್ನು ವರ್ಣಿಸುವಾಗ ಬಳಸುವ 'ಗಾಳಿಗುದುರೆ' ಅತೀವ ವೇಗವನ್ನು ಸೂಚಿಸುತ್ತದೆ.'ಸಾವಿರ ಕುದುರೆ ಸರದಾರ, ಮನೆ ಹೆಂಡ್ತಿ ಕಾಸ್ದಾರ' ಎಂಬುದು ಜನಜನಿತವಾದ ಗಾದೆ.

=====

**ಕುಪ್ಪೆ:** ರಾಶಿ ಎಂಬರ್ಥದ ಈ ದ್ರಾವಿಡ ಶಬ್ದವು ತಮಿಳಿನಲ್ಲಿ ಕುಪ್ಪಂ, ಕುಪ್ಪೈ ಎಂಬ ರೂಪಗಳಲ್ಲಿಯೂ, ತೆಲುಗು ಮಲಯಾಳಂನಲ್ಲಿ ಕುಪ್ಪ ಎಂಬರೂಪದಲ್ಲಿಯೂ, ತುಳುವಿನಲ್ಲಿ ಕುಪ್ಪೆ, ಗುಪ್ಪೆ ರೂಪಗಳಲ್ಲಿಯೂ ಬಳಕೆಯಲ್ಲಿದೆ. "ಕಸಕುಪ್ಪೆಯೊಳ್ ತಾಮರೆ ಮೂಡಿದುದಂ ಸಮುದ್ರಂ ಮೇಱಿದಪ್ಪಿದುದುಮಂ" ಎಂಬ ಪ್ರಯೋಗ 'ವಡ್ಡಾರಾಧನೆ'ಯದು. ಕುಪ್ಪೆ ಎಂದರೇ ಕಸ ಎಂಬರ್ಥವೂ ಇತ್ತು: "ನೊಳವಿಂಗೆ ಕುಪ್ಪೆವರಮೇಂ ತ್ರಿಲೋಕಮೊಂದಾಗಿ ಬಂದು ತಾಗುವೊಡಕ್ಕುಂ": ಜನ್ನನ 'ಅನಂತನಾಥಪುರಾಣ'. 'ಕುಪ್ಪೆಗೊಳ್' ಎಂದರೆ ರಾಶಿಯಾಗು ಎಂದರ್ಥ ನೇಮಿನಾಥನ 'ನೇಮಿನಾಥಪುರಾಣ'ದಲ್ಲಿನ "ಕೆಲದೊಳ್ ಕುಪ್ಪೆಗೊಂಡ ಮಾಣಿಕಂಗಳ ಬೆಳಗಿನೊಡನೆ ಬಾಳಕನ ಮೆಯ್ವೆಳಗು ದಳವೇಱೆ" ಎಂಬಲ್ಲಿ ಕಾಣಿಸುತ್ತದೆ. ಹಾಗೆಯೇ 'ಕುಪ್ಪು' ಎಂದರೆ ರಾಶಿಮಾಡು ಎಂದರ್ಥ: "ಕುಪ್ಪುಪಂಜೀಕರಣೇ"– 'ಶಬ್ದಮಣಿದರ್ಪಣ'. 'ಕುಪ್ಪಿಸು' ಎಂದರೆ ಒಟ್ಟುಗೂಡಿಸು, ರಾಶಿಮಾಡು ಎಂದರ್ಥ: "ಮುಂದೆ ಕುಪ್ಪಿಸಿ ಕುಪ್ಪೆಯಾಗಿ ಮಾನಸರಂ ತೆಗಿಸಿ ರಕ್ಕಸರ ಮುಂದೆ ರಾಸಿಗೆಯ್ದಂತೆ" – 'ಲೀಲಾವತಿ'. 'ಕುಪ್ಪೆಗೆಯ್' ಎಂದರೂ ರಾಶಿಮಾಡು ಎಂದರ್ಥ: "ಪೊಮ್ಮಟೆಗಱೆದಪ್ಪುದು ಗುಡಿಸಿ ಕುಪ್ಪೆಗೆಯ್ವಂ ಬರ್ಪುದು" – ತಿರುಮಲಾರ್ಯನ 'ಚಿಕದೇವರಾಜವಿಜಯ.'

ಈ ಶಬ್ದವು 'ಗುಪ್ಪೆ' ಎಂಬ ರೂಪದಲ್ಲಿಯೂ ಬಳಕೆಯಲ್ಲಿದೆ."ಅಡಕೆಯ ಗುಪ್ಪೆಯಷ್ಟಾಭರಣಂಗಳುಂಟು" ಎಂಬುದು 'ಭರತೇಶವೈಭವ'ದ ಮಾತು."ಬೆಚ್ಚಗಿನ ನೆಲಕೆ ಕುಸಿದ ಮಣ್ಣಿನ ಗುಪ್ಪೆ ಹಳೆ ನೆಹುಗಳನೆಲ್ಲ ಹುಗಿದಿಟ್ಟುಕೊಂಡು ಬಿದ್ದಿತ್ತು ತಬ್ಬಲಿಯಾಗಿ" ಎಂಬಿವು ಗಂಗಾಧರ ಚಿತ್ತಾಲರ 'ಘಾಟಿ' ಕವನದ ಸಾಲುಗಳು.ರಾಶಿಯಾಗು ಎಂಬರ್ಥದಲ್ಲಿ 'ಗುಪ್ಪೆಗೊಳ್' ಎಂಬ ರೂಪ ಪ್ರಯೋಗವಾಗುತ್ತದೆ: "ಮಡುಗಟ್ಟಿದ ನೆತ್ತರ ಪೆರ್ವೊನಲಿಂ ಕುಪ್ಪಳಿಸಿ ಗುಪ್ಪೆಗೊಂಡ ದೊಂಡೆಗರುಳ್ಗಳಿಂ" ಎಂಬುದು ಷಡಕ್ಷರನ 'ರಾಜಶೇಖರವಿಳಾಸ'ದ ಮಾತು. ಗುಪ್ಪೆ ಎಂದರೆ ದಿಣ್ಣೆ ಎಂದರ್ಥವಿದೆ: ಮಕ್ಕಳು ಮರಳನ್ನು 'ಗುಪ್ಪೆಮಾಡಿ' ಆಡುವುದನ್ನು ನೋಡಬಹುದು. 'ಜಾರುಗುಪ್ಪೆ' (ಜಾರೋಬಂಡೆ) ಎಂಬ ಪದವನ್ನು ನೋಡಬಹುದು: "ಕಾಮನ ಬಿಲ್ಲಿನ ಜಾರುಗುಪ್ಪೆಯೊಳು ಜಾರುತ ಬಂದಳು ಮುಗಿಲಿಂದ" ಎಂಬುದು ಪುತಿನ ಅವರ 'ಅಹಲ್ಯೆ' ಗೀತನಾಟಕದ ಸಾಲು. ಕುಪ್ಪೆ ಅಥವಾ ಗುಪ್ಪೆ ಎಂಬುದು ಊರಿನ ಹೆಸರಿನ ಕೊನೆಯಲ್ಲಿ ಬರುವ ಅನೇಕ ನಿದರ್ಶನಗಳಿವೆ: ಬೆಂಗಳೂರಿನಲ್ಲಿ ಸೇರಿಹೋಗಿರುವ ಅತ್ತಿಗುಪ್ಪೆ, ಕತ್ತರಿಗುಪ್ಪೆ, ತಟ್ಟುಗುಪ್ಪೆ ಮುಂತಾದುವನ್ನು ನೋಡಬಹುದು. ಈ ಊರುಗಳು ತಮ್ಮ ಸುತ್ತಮುತ್ತಲಲ್ಲಿ ಎತ್ತರವಾದ ಜಾಗದಲ್ಲಿರುವುದನ್ನು ಗಮನಿಸಬಹುದು.



ಶ್ರೀಮತಿ ಕಮಲಿನಿ ಶಾ.ಬಾಲೂರಾವ್ ಅವರು ಸ್ಥಾಪಿಸಿರುವ, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಕಳೆದ ಮೂರು ವರ್ಷಗಳಿಂದ ಕೊಡಮಾಡುತ್ತ ಬಂದಿರುವ 2016ನೇ ಸಾಲಿನ'ಶ್ರೀ ಸಾಹಿತ್ಯ ಪ್ರಶಸ್ತಿ'ಯನ್ನು ನಾಡೋಜ ಡಾ||ಕಮಲಾಹಂಪನಾ ಅವರಿಗೆ ನೀಡಿದ ಸಂದರ್ಭದಲ್ಲಿ ಶ್ರೀಮತಿ ಕಮಲಿನಿ ಶಾ ಬಾಲೂರಾವ್ ಅವರಿಗೆ ಅಭಿನಂದಿಸುತ್ತಿರುವುದು.

ಕರ್ನಾಟಕ ಇತಿಹಾಸ ಅಕಾದೆಮಿ (ರಿ.), ಬೆಂಗಳೂರು-560 019

*ಸಹಯೋಗ*

ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ, ಬೆಂಗಳೂರು-560 001

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು-560 019

(ಶ್ರೀ ಎಂ.ಎ. ರಾಮಾನುಜ ಐಯ್ಯಂಗಾರ್ ಮತ್ತು ಪ್ರೊ|| ಬಿ. ರಾಮಸ್ವಾಮಿ ದತ್ತಿ)

**"ಕನ್ನಡ ಮೋಡಿ ಲಿಪಿ ಕಾರ್ಯಾಗಾರ"**

2017 ಜನವರಿ, 27, 28 ಮತ್ತು 29 (ಶುಕ್ರವಾರ, ಶನಿವಾರ ಮತ್ತು ಭಾನುವಾರ)

ಉದ್ಘಾಟನೆ

ಶ್ರೀ ಕೆ.ಎ. ದಯಾನಂದ, ಕೆ.ಎ.ಎಸ್.
ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯ

ಮುಖ್ಯ ಅತಿಥಿಗಳು

ಡಾ|| ಪಿ.ವಿ. ನಾರಾಯಣ
ಅಧ್ಯಕ್ಷರು, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಅಧ್ಯಕ್ಷತೆ

ಡಾ|| ದೇವರಕೊಂಡಾರೆಡ್ಡಿ
ಅಧ್ಯಕ್ಷರು, ಕರ್ನಾಟಕ ಇತಿಹಾಸ ಅಕಾದೆಮಿ

ದಿನಾಂಕ 27-01-2017 ಶುಕ್ರವಾರ ಬೆಳಗ್ಗೆ 10-30 ಗಂಟೆಗೆ

ಸ್ಥಳ : ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, 3ನೇ ಮುಖ್ಯರಸ್ತೆ,
ನರಸಿಂಹರಾಜಾ ಕಾಲೋನಿ, ಬೆಂಗಳೂರು-560 019

ತಮಗೆಲ್ಲರಿಗೂ ಆದರದ ಸುಸ್ವಾಗತ

ಡಾ|| ದೇವರಕೊಂಡಾರೆಡ್ಡಿ
ಅಧ್ಯಕ್ಷರು

ಶ್ರೀ ಎಂ.ಬಿ. ಪಾಟೀಲ್
ಕೋಶಾಧಿಕಾರಿ

ಡಾ|| ಎಂ.ಜಿ. ನಾಗರಾಜ್
ಡಾ|| ಎಚ್.ಎಸ್. ಗೋಪಾಲರಾವ್
ಉಪಾಧ್ಯಕ್ಷರು

ಶ್ರೀ ಜಿ.ಕೆ. ದೇವರಾಜ ಸ್ವಾಮಿ
ಪ್ರಧಾನ ಕಾರ್ಯದರ್ಶಿ

ಶ್ರೀ ಕೆ.ಎಲ್. ರಾಜಶೇಖರ್
ಶ್ರೀಮತಿ ವಿ. ಸಂಧ್ಯಾ ಕೌಶಿಕ್
ಕಾರ್ಯದರ್ಶಿಗಳು

# ಪುಸ್ತಕ ಪರಿಚಯ

ಸತ್ಯ ನಾರಾಯಣರಾವ್ (ಹೊ. ರಾ) ಸಂ.

**ಕವಿಗಳು ಕಂಡ ಬಿ.ಎಂ.ಶ್ರೀ : ವಿವಿಧ ಕವಿಗಳ ಕವನ ಸಂಕಲನ**

ಪು.xii+100 ಬೆಲೆ ರೂ 80/- 2012

ಆಚಾರ್ಯ ಬಿ.ಎಂ.ಶ್ರೀ ಯವರ ಮೇರು ವ್ಯಕ್ತಿತ್ವ, ಪಾಂಡಿತ್ಯ, ಸೃಜನ ಶೀಲತೆ, ಕಲ್ಪನಾಶ್ರೀಮಂತಿಕೆ, ಅಸಾಧಾರಣ ಸಾಹಿತ್ಯ ಸೃಷ್ಟಿ ಅನುಪಮ, 'ಶ್ರೀ'ಯವರು ಬರೆದದ್ದು ಕಡಿಮೆ ಆದರೆ ಅವರ ಕಾವ್ಯ, ನಾಟಕ, ಗದ್ಯ ಬರಹ, ಮುಂದಿನ ಪೀಳಿಗೆಗೆ ಮಾರ್ಗದರ್ಶಿಯಾಗಿತ್ತು. 'ಬಿ.ಎಂ.ಶ್ರೀ ಯವರನ್ನು ಕುರಿತು ಹಿರಿಯ ಕಿರಿಯ ಕವಿಗಳಿಂದ ರಚಿತವಾದ ಆಯ್ದ ಕವನಗಳ ಸಂಗ್ರಹ ಈ ಕೃತಿ.

ಲಿಂಗಯ್ಯ ಡಿ

**ಕನ್ನಡ ನವೋದಯ ಪ್ರವರ್ತಕ ಬಿ.ಎಂ. ಶ್ರೀಕಂಠಯ್ಯ:**

ವ್ಯಕ್ತಿ ಪರಿಚಯ ಮತ್ತು ಸೂಕ್ತಗಳು (ಎರಡನೇ ಮುದ್ರಣ) [ಪ್ರಥಮ ಮುದ್ರಣ 2005]

ಪು.50 ಬೆಲೆ ರೂ. 30/- 2012

ಬಿ. ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಬೆಳ್ಳೂರು ಶಾಖೆಯ ಮಹಾಪೋಷಕರಾದ ಶ್ರೀ ಶ್ರೀಶ್ರೀ ಬಾಲಗಂಗಾಧರನಾಡು ಸ್ವಾಮಿಯವರಆತಯದಂತೆ ರಚಿಸಿರುವ ಕಿರು ಪುಸ್ತಕ ಇದು. ಬಿ. ಎಂ.ಶ್ರೀಯವರನ್ನು ಕುರಿತು ಸಂಕ್ಷಿಪ್ತವಾದ ವಿದ್ವತ್ ಪೂರ್ಣ ಲೇಖನವಲ್ಲದೆ.ಅವರಆಯ್ದ ಸೂಕ್ತಗಳು ಜೀವನದ ಮೈಲಿಗಲ್ಲುಗಳು ಹಾಗೂ ಅವರ ಕೃತಿಗಳ ಮಾಹಿತಿಒದಗಿಸಲಾಗಿದೆ.

**ಶ್ರೀ ಕೃಷ್ಣ ದೇವರಾಯನ ದಿನಚರಿ.**

(ಪ್ರಧಾನ ಸಂಪಾದಕರು : ಎಂ. ವಿ. ಸೀತಾರಾಮಯ್ಯ)

ಪು.92 ಬೆಲೆ ರೂ. 80/- 2013

ದೇಶದ'ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಶಿಲಾಶಾಸನಗಳು, ನಾಣ್ಯಗಳು, ಮಾಸ್ತಿ ವೀರಗಲ್ಲುಗಳು, ತಾದವೋಲೆ, ಭೂಜಗ ಪತ್ರ, ಪ್ರಾಚೀನ ಹಸ್ತ ಪ್ರತಿಗಳು, ಬಖೈರುಗಳೂ ಇತ್ಯಾದಿಗಳ ಪಾತ್ರ ಗುರುತರವಾದದ್ದು, ವಿಜಯನಗರ ಕೃಷ್ಣ ದೇವರಾಯನ ದಿನಚರಿಯ ವಿವರಗಳನ್ನು ತಾಳೆಗರಿ ಹಸ್ತ ಪ್ರತಿಯಲ್ಲಿ ನಮೂದಿಸಲಾಗಿತ್ತು. ಇದನ್ನು ಮುಕ್ಕು ತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಎಂಬುವರು ರಾಜಾಜ್ಞೆಯಂತೆ ಬರೆದಿದ್ದಾರೆ. ಲಿಪಿ ಮತ್ತು ಭಾಷೆಯ ಆಧಾರದ ಮೇಲೆ ಇದು ಬಹುಶಃ ಕ್ರಿ. ಶ. 16ನೇ ಶತಮಾನದ ಕನ್ನಡದಲ್ಲಿರುವ ತಾಳೆಯೋಲೆ ಗ್ರಂಥವೆನ್ನಬಹುದು. ಶ್ರೀ ರಾಮಾನುಚಾಚಾರ್ಯರ ವಂದನೆಯಿಂದ ಆರಂಭವಾಗುವ ಈ ಗ್ರಂಥದಲ್ಲಿ ಅರಸನ ದಿನ ನಿತ್ಯದ ಕಾರ್ಯಗಳನ್ನು ನಮೂದಿಸಲಾಗಿದೆ.

ಭಾಸ್ಕರ್ (ಎಂ.ಎಸ್)

**ಎಂ. ವಿ. ಸೀತಾರಾಮಯ್ಯ :ಜೀವನ ಮತ್ತು ಸಾಹಿತ್ಯ ಸಾಧನೆ**

ಪು.96 ಬೆಲೆ ರೂ. 50/- 2013

'ರಾಘವ' ಕಾವ್ಯನಾಮದಿಂದ ಪ್ರಸಿದ್ಧರಾದ ಮೈಸೂರು ವೆಂಕಟದಾಸಪ್ಪ ಸೀತಾರಾಮಯ್ಯನವರು ಆಧುನಿಕ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಸಾಹಿತಿಗಳಲ್ಲಿ ಅಗ್ರಗಣ್ಯರುಕಾವ್ಯ ಮೀಮಾಂಸೆ ಮತ್ತು ವ್ಯಾಕರಣ ಕ್ಷೇತ್ರಕ್ಕೆ ಅವರ ಕೊಡುಗೆ ಅವಿಸ್ಮರಣೀಯ ಎಂ.ವಿ.ಸೀ. ಅವರ ಶತಮಾನೋತ್ಸವ ಸಂದರ್ಭದಲ್ಲಿ ಅದರ ಕುರಿತದಂತೆ ವಿದ್ವಾಂಸರು, ಹಿತೈಷಿಗಳು ಹಾಗೂ ಶಿಷ್ಯರು ವಿಮರ್ಶಾತ್ಮಕ ಹಾಗೂ ವಿದ್ಯತ್ಪೂರ್ಣ ಲೇಖನಗಳನ್ನು ಹಲವಾರು ದಿನ ಪತ್ರಿಕೆ, ಮಾಸ ಪತ್ರಿಕೆ ಇತ್ಯಾದಿಗಳಲ್ಲಿ ಪ್ರಕಟಿಸಿದ್ದರು ಇವುಗಳಲ್ಲಿ ಕೆಲವನ್ನ ಆಯ್ಕೆ ಮಾಡಿ, ಪ್ರಸ್ತುತ ಕೃತಿಯಲ್ಲಿ ಸಂಕಲಿಸಲಾಗಿದೆ ಅಂತಿಮ ಅಧ್ಯಾಯದಲಿ ನೀಡಿರುವ ಎಂ. ವಿ.ಸೀ ಅವರ ಜೀವನ ಪಥ, ಸಾಹಿತ್ಯ ಕೃಷಿಯ ವಿವರಗಳು ಕನ್ನಡ ಸಾಹಿತ್ಯ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ ಬಹುಉಪಯುಕ್ತ ಆಕರ ವಿವರಣೆ.

# ಗೌರಿ ಸುಂದರ್

ಪ್ರಸಿದ್ಧ ಪ್ರಕಾಶಕ, ಚಲನ ಚಿತ್ರ ನಿರ್ದೇಶಕ, ಚಲನಚಿತ್ರ ನಿರ್ಮಾಪಕ ಶ್ರೀ ಗೌರಿ ಸುಂದರ್‌ಅವರು ದಿನಾಂಕ 31ನೇ ಡಿಸೆಂಬರ್ 2016ರ ಮಧ್ಯರಾತ್ರಿಯಲ್ಲಿ ನಿಧನ ಹೊಂದಿದರು. ಅವರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸದಸ್ಯರೂ ಹಾಗೂ ಸಕ್ರಿಯ ಅಭಿಮಾನಿಯಾಗಿದ್ದರು. ಅವರು ಈವರೆಗೆ 397 ಪುಸ್ತಕಗಳನ್ನು ಪ್ರಕಟಿಸಿದ್ದರು. ಅವರಿಗೆ ಹೊಂಗನಸು ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸದಸ್ಯರು ಹಾಗೂ ಮಾಜಿಕಾರ್ಯಕಾರಿ ಸಮಿತಿಯ ಸದಸ್ಯ ಶ್ರೀ ಎಂಎಸ್ ಭಾಸ್ಕರ್ ಅವರು ಒಂದು ಕವನದ ಮೂಲಕ ವ್ಯಕ್ತ ಪಡಿಸುವ ಶ್ರದ್ಧಾಂಜಲಿಯನ್ನು ಈ ಕೆಳಗೆ ನೀಡಲಾಗಿದೆ.

### ಗೌರಿ ಸುಂದರ್

ಸ್ನೇಹಕ್ಕೆ ಬೆಲೆಯಿಲ್ಲ
ಇರುವುದು, ಬಿಡಿಸಿಕೊಳ್ಳುವ
'ಬಲೆ'ಯಲ್ಲ
ನನ್ನ ಅವರ(ನ) ಸ್ನೇಹ
ಇತ್ತೀಚೆಗೆ ಆಗಿದ್ದು
ನಿತ್ಯ ನೋಡದಿದ್ದರೆ
ಮಾತಾಡದಿದ್ದರೆ
ಕಳೆದುಕೊಂಡಿದ್ದು
ಏನೆಂದು ಅರ್ಥವಾಗಿಲ್ಲ
ಸಂಬಂಧ– ಸ್ನೇಹ
ಅಂತರವಿಲ್ಲದ ಅನುಬಂಧ
ಇಷ್ಟ ಕಷ್ಟ ಹಂಚಿಕೊಂಡಿರುವ
ಮಿತ್ರ ಈ ಸುಂದರ
ನಾವಿಬ್ಬರೂ ವಯಸ್ಸಿನಲ್ಲಿ
ಹತ್ತಿರ–ಹತ್ತಿರ
'ತಿಳುವಳಿಕೆ'ಯಲ್ಲಿ
ಇನ್ನೂ ಆಗಿಲ್ಲ
ನಾನು ಅವರ ಎತ್ತರ
ನಗು ಮುಖದ ಪ್ರಶ್ನೆಯಲ್ಲೇ
ಉತ್ತರವು ಸಿದ್ಧವಾಗಿರುವ
ಅಪರೂಪದ ಸನ್ಮಿತ್ರ
ನಾನು ಇಪ್ಪತ್ತು ಮೆಟ್ಟಿಲಹತ್ತಿ
'ಲೆನ್ಸ್'ನಲ್ಲಿ ಓದುವ
ಕನ್ನಡಕದ ನೆರವಿಲ್ಲದೇ
ಓಡಾಡುವ ಅನಾರೋಗ್ಯದ
ನೆರಳಲ್ಲೂ ಆರೋಗ್ಯವಾಗಿರುವ
ಸುಂದರ
ನನಗಿನ್ನೂ ಅರ್ಥವಾಗುವ ಸುಂದರ
ಸಾಹಿತ್ಯದ ಬಲೆಯಲ್ಲಿ
ಸಂಗೀತದ ಹೊಳೆಯಲ್ಲಿ
ಪ್ರೀತಿಯಿಂದ ಓಡಾಡುತ್ತಿರುವ
ಪಂಜರದ ಗಿಳಿಯಂತೆ
ಪ್ರೀತಿಸುತ್ತಿದ್ದೇನೆ.
ನಮ್ಮ ಸ್ನೇಹಕ್ಕೆ ಆಗಾಗ ಬ್ರೇಕಿಂಗ್
–ನ್ಯೂಸ್ ಆಗುವುದು ನಮಗಿಷ್ಟವಿಲ್ಲ
ಪ್ರತಿನಿತ್ಯ ಕಡಿಮೆಯೆಂದರೆ
'ಮೊಬೈಲ್ ನಲ್ಲಿ
ನೂರು ಬಾರಿ ಕಿವಿಗೆ– ಬಾಯಿಗೆ
ಕಸರತ್ತು ಮಾಡುವ
ಸಂವಾದಕ ಈ ಸುಂದರ.
ನನಗಿಂತ ಚಿಕ್ಕವನಾದರೂ
ಗೌರವದಿಂದ ಅನಂತ
ನಮಸ್ಕಾರಗಳು

–ಎಂ ಎಸ್ ಭಾಸ್ಕರ್

HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-01-2017

## ೨೦೧೭ ಜನವರಿ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷರಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ಜನವರಿ ತಿಂಗಳಿನಲ್ಲಿ ೪೦ ಗ್ರಂಥಗಳ ಶುಷ್ಕ ಶುದ್ಧೀಕರಣ, ೪೦ ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, ೪೧ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೪೧ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೧೨ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ , ಮತ್ತು ೧೦ ಗ್ರಂಥಗಳಿಗೆ ಸೂಚಿಯನ್ನು ತಯಾರಿಸಲಾಗಿರುತ್ತದೆ.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸದಸ್ಯರು ಹಾಗೂ ಕರ್ನಾಟಕ ಇತಿಹಾಸ ಅಕಾಡೆಮಿಯ ಅಧ್ಯಕ್ಷರಾದ ಡಾ|| ದೇವರ ಕೊಂಡಾರೆಡ್ಡಿ ಅವರು ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹಾಲಯಕ್ಕೆ ಶುಕಸಪ್ತತಿ–(ಭಾಷೆ : ಸಂಸ್ಕೃತ ಲಿಪಿ :ಕನ್ನಡ) ಎಂಬ ಕಾಗದದ ಹಸ್ತಪ್ರತಿಯನ್ನು ನೀಡಿರುತ್ತಾರೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಅವರಿಗೆ ವಂದನೆಗಳನ್ನು ಸಲ್ಲಿಸುತ್ತದೆ.

## ಕೋರಿಕೆ :

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.........................................................................................

.............................................................................................................

.............................................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೪೭೭